

# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 04-03-2021 ಪ್ರಶ್ನೆ ಸಂಖ್ಯೆ : 504 (617)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಅರುಣ ಶಹಾಪುರ(ಶಿಕ್ಷಕರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 04-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : ಆರ್ಥಿಕ ಮಿತವ್ಯಯ ಆದೇಶವನ್ನು ಹಿಂಪಡೆಯುವ ಬಗ್ಗೆ

(ಅ) ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಉನ್ನತ ಶಿಕ್ಷಣ ಇಲಾಖೆಯ ಅನುದಾನಿತ ಪ್ರಾಥಮಿಕ, ಪ್ರೌಢ ಶಾಲೆ, ಪದವಿ ಪೂರ್ವ ಹಾಗೂ ಪದವಿ ಕಾಲೇಜುಗಳಲ್ಲಿ ಖಾಲಿ ಹುದ್ದೆ ಭರ್ತಿ ಮಾಡುವ ಕುರಿತಂತೆ ಆರ್ಥಿಕ ಇಲಾಖೆಯು ಆರ್ಥಿಕ ಮಿತವ್ಯಯದ ಆದೇಶ ಹೊರಡಿಸಿ ಹುದ್ದೆ ಭರ್ತಿ ಮಾಡುವುದನ್ನು ತಡೆಹಿಡಿಯಲಾಗಿದೆಯೇ;

(ಆ) ಆರ್ಥಿಕ ಇಲಾಖೆಯು ಹೊರಡಿಸಿರುವ ಆರ್ಥಿಕ ಮಿತವ್ಯಯದ ಆದೇಶವನ್ನು ಹಿಂಪಡೆಯುವಂತೆ ಅಥವಾ ಸಡಿಲಗೊಳಿಸುವಂತೆ ಈಗಾಗಲೇ ಪ್ರಸ್ತಾವನೆಯನ್ನು ಶಿಕ್ಷಣ ಇಲಾಖೆಯು ಮಂಡಿಸಿದೆಯೇ; ಮಂಡಿಸಿದ್ದಲ್ಲಿ, ಪ್ರಸ್ತಾವನೆಯು ಯಾವ ಹಂತದಲ್ಲಿದೆ;

(ಇ) ಈ ಆದೇಶವನ್ನು ಸಡಿಲಗೊಳಿಸಿ ಖಾಲಿ ಹುದ್ದೆಗಳ ಭರ್ತಿಗೆ ಹಾಗೂ ವೇತನದ ಹಂತಕ್ಕೆ ಬಂದ ಪ್ರಸ್ತಾವನೆಗಳನ್ನು ಅನುಮೋದಿಸಿ ವೇತನ ಬಿಡುಗಡೆಗೊಳಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ;

(ಈ) ಆರ್ಥಿಕ ಇಲಾಖೆಯ ಆರ್ಥಿಕ ಮಿತವ್ಯಯದ ಆದೇಶ (ಸುತ್ತೋಲೆ ಸಂಖ್ಯೆ: ಆಇ:157:ವೆಚ್ಚ-8/2020) ವನ್ನು ಹಿಂಪಡೆಯಲಾಗುವುದು ಯಾವಾಗ?